ಡಾ॥ ಶ್ರೀನಿವಾಸ ರಿತ್ತಿ

# ಕರ್ನಾಟಕದಲ್ಲಿ ಇತಿಹಾಸ ಶಿಕ್ಷಣ ಮತ್ತು ಸಂಶೋಧನೆ*

ಕರ್ನಾಟಕ ಇತಿಹಾಸ ಅಕಾದೆಮಿಯ ಮೂರನೆಯ ವಾರ್ಷಿಕ ಸಮ್ಮೇಳನಕ್ಕೆ ಅಧ್ಯಕ್ಷನೆಂದು ನನ್ನನ್ನು ಅಕಾದೆಮಿಯ ಪದಾಧಿಕಾರಿಗಳು ಆರಿಸಿದ್ದಾರೆ. ಅವರ ಈ ಔದಾರ್ಯಕ್ಕೆ ಋಣಿಯಾಗಿದ್ದೇನೆ. ಕಳೆದ ಸುಮಾರು ೩೦ ವರ್ಷಗಳಿಂದ ಈ ಕ್ಷೇತ್ರದಲ್ಲಿ, ವಿಶೇಷವಾಗಿ ಶಾಸನವಿಜ್ಞಾನದ ಕ್ಷೇತ್ರದಲ್ಲಿ ಕೆಲಸ ಮಾಡುತ್ತಿದ್ದೇನೆ. ಈ ಕ್ಷೇತ್ರದಲ್ಲಿ ಹೆಸರು ಮಾಡಿದ ಹಲವಾರು ವಿದ್ವಾಂಸರ ನಿಕಟ ಒಡನಾಟವು ನನಗೆ ದೊರಕಿದೆ. ಇದರಿಂದಾಗಿ ಈ ಕ್ಷೇತ್ರದಲ್ಲಿ ಸ್ವಲ್ಪಮಟ್ಟಿಗೆ ಕೆಲಸ ಮಾಡಲು ನನಗೆ ಸಾಧ್ಯವಾಗಿದೆ. ಈ ಅಲ್ಪ ಕಾರ್ಯವನ್ನು ದೊಡ್ಡದು ಮಾಡಿ ಡಾ॥ ದೀಕ್ಷಿತ, ಡಾ॥ ಕಾಮತ ಮತ್ತು ಅವರ ಸ್ನೇಹಿತರು ನನಗೆ ಈ ಗೌರವದ ಸ್ಥಾನವನ್ನು ಕೊಟ್ಟಿದ್ದಾರೆ. ಈ ಗೌರವ ನನ್ನನ್ನು ಈ ಕ್ಷೇತ್ರಕ್ಕೆ ತಂದು ಮುನ್ನಡೆಯುವಂತೆ ದಾರಿ ತೋರಿಸಿದ ಹಿರಿಯರಿಗೆ, ಗುರುಗಳಿಗೆ ಸಲ್ಲುತ್ತದೆ. ಅವರೆಲ್ಲರನ್ನು ಇಲ್ಲಿ ಕೃತಜ್ಞತೆಯಿಂದ ಸ್ಮರಿಸಿಕೊಂಡು ನನ್ನ ಭಾಷಣವನ್ನು ಪ್ರಾರಂಭಿಸುತ್ತೇನೆ.

ಕಳೆದ ಸುಮಾರು ೩೦ ವರ್ಷಗಳಿಂದ ನಾನು ಕರ್ನಾಟಕ ಇತಿಹಾಸದ ಅಭ್ಯಾಸ, ಶಿಕ್ಷಣ, ಸಂಶೋಧನೆ ಮತ್ತು ಇತಿಹಾಸದ ಗ್ರಂಥರಚನೆಯ ಕಾರ್ಯಗಳಲ್ಲಿ ಭಾಗವಹಿಸುತ್ತ ಬಂದಿದ್ದೇನೆ. ಹೀಗಾಗಿ ಇವುಗಳ ಸಂಬಂಧದಲ್ಲಿ ಅನೇಕ ಸಮಸ್ಯೆಗಳು, ವಿಚಾರಗಳು ನನಗೆ ಎದುರಾಗಿವೆ. ಇಂಥವುಗಳ ಬಗ್ಗೆ ಯೋಚಿಸುತ್ತಿರುವಾಗ ಇವುಗಳ ಕಾರ್ಯವಿಧಾನದ ಬಗ್ಗೆ, ಮುನ್ನಡೆಯ ಬಗ್ಗೆ ಹಲವಾರು ವಿಚಾರಗಳು ಬರುತ್ತವೆ. ಇಂಥ ಕೆಲವು ವಿಚಾರಗಳನ್ನು ಈ ಅವಕಾಶವನ್ನು ಉಪಯೋಗಿಸಿ ಕೊಂಡು ನಿಮ್ಮ ಮುಂದೆ ಇಡಲು ಯತ್ನಿಸುತ್ತೇನೆ. ಇವುಗಳನ್ನು ಈ ಕೆಳಗಿನ ಮೂರು ವಿಭಾಗಗಳಲ್ಲಿ ವಿಂಗಡಿಸ ಬಯಸುತ್ತೇನೆ: ೧. ಇತಿಹಾಸದ ಅಭ್ಯಾಸ ಮತ್ತು ಶಿಕ್ಷಣ, ೨. ಇತಿಹಾಸದ ಸಂಶೋಧನೆ, ಹಾಗೂ ೩. ಇತಿಹಾಸದ ಗ್ರಂಥರಚನೆ. ಇವೆಲ್ಲವುಗಳು ಕರ್ನಾಟಕದ ಇತಿಹಾಸಕ್ಕೆ ಸಂಬಂಧಿಸಿದಂತೆಯೇ ಇವೆ ಎಂದು ಬೇರೆ ಹೇಳಬೇಕಾಗಿಲ್ಲ.

**೧. ಇತಿಹಾಸದ ಅಭ್ಯಾಸ ಮತ್ತು ಶಿಕ್ಷಣ:** ನಮ್ಮ ಶಿಕ್ಷಣ ವ್ಯವಸ್ಥೆಯಲ್ಲಿ ಇತಿಹಾಸವನ್ನು ಮೂರು ಹಂತಗಳಲ್ಲಿ ಕಲಿಸುತ್ತೇವೆ ಪ್ರಾಥಮಿಕ ಶಾಲೆ, ಕಾಲೇಜು ಹಾಗೂ ವಿಶ್ವವಿದ್ಯಾಲಯ. ಪ್ರಾಥಮಿಕ ಹಂತದಲ್ಲಿಯೂ ಐತಿಹಾಸಿಕ ವ್ಯಕ್ತಿಗಳನ್ನು, ಘಟನೆಗಳನ್ನು ಕುರಿತು ಚಿಕ್ಕ ಚಿಕ್ಕ ಪಾಠಗಳು ಇದ್ದೇ ಇರುತ್ತವೆ. ಈ ಎಲ್ಲ ಹಂತಗಳಲ್ಲಿ ಇತಿಹಾಸವನ್ನು ಏಕೆ ಕಲಿಸುತ್ತೇವೆ, ಕಾಲೇಜಿನಲ್ಲಿ ಕಲಿತದ್ದನ್ನೇ ಮತ್ತೆ ವಿಶ್ವವಿದ್ಯಾಲಯದಲ್ಲಿ ಏಕೆ ಕಲಿಯಬೇಕು ಎಂಬ ಪ್ರಶ್ನೆಗಳು ಬರುತ್ತವೆ. ಆದರೆ ನಮಗೆಲ್ಲ ತಿಳಿದಂತೆ ವಿವಿಧ ಹಂತಗಳಲ್ಲಿ ವಿವಿಧ ದೃಷ್ಟಿಕೋನಗಳಿಂದ ಇದನ್ನು ಕಲಿಸುತ್ತೇವೆ. ಮೊದಲ ಹಂತಗಳಲ್ಲಿ ಅದನ್ನೇ ಆಳವಾಗಿ ಅಭ್ಯಸಿಸಿ ಅದರ ಪ್ರಯೋಜನವನ್ನು ಮನದಟ್ಟು ಮಾಡಿಕೊಡುವುದರ

* ಅಧ್ಯಕ್ಷ ಭಾಷಣ

ಜೊತೆಗೆ ಅದರಲ್ಲಿ ಹೆಚ್ಚಿನ ಸಂಶೋಧನೆ ನಡೆಸಲು ಪ್ರೇರೇಪಿಸುವಂತೆ ಕಲಿಸಬೇಕಾಗುತ್ತದೆ.

ಒಮ್ಮೊಮ್ಮೆ ಕೆಲವರು ಒಂದು ಪ್ರಶ್ನೆ ಕೇಳುತ್ತಾರೆ. ಹಳೆಯ ಸುದ್ದಿಗಳನ್ನು ಇಂದು ತಿಳಿದುಕೊಳ್ಳುವುದರಿಂದ ಉಪಯೋಗವೇನು ? — ಎಂದು. ಅದಕ್ಕೆ ನಮ್ಮ ಪ್ರಾಚೀನರು ಹೇಳುವ ಉತ್ತರವೆಂದರೆ, ಹಿಂದಿನ ಇತಿಹಾಸ ವನ್ನು ಅರಿಯುವುದರಿಂದ ಇಂದಿನವರಿಗೆ ಪ್ರಯೋಜನ ಇದೆ. "ಪ್ರಯೋಜನಮನುದ್ದಿಶ್ಯ ನ ಮಂದೋಪಿ ಪ್ರವರ್ತತೆ" ಎಂದು ಶಂಕರಾಚಾರ್ಯರು ಹೇಳಿದಂತೆ ಪ್ರಯೋಜನವಿಲ್ಲದೆ ಯಾವ ಕೆಲಸವನ್ನೂ ಮಾಡಲಾಗು ವುದಿಲ್ಲ. ಹಾಗಾದರೆ ಇತಿಹಾಸದ ಅಭ್ಯಾಸದ ಪ್ರಯೋಜನವೇನು ? ಇದಕ್ಕೆ ಉತ್ತರ ನಮ್ಮ ಪ್ರಾಚೀನರು ರೂಪಿಸಿಕೊಂಡ ಇತಿಹಾಸ ದೃಷ್ಟಿಯಲ್ಲಿದೆ.

ಧರ್ಮಾರ್ಥ ಕಾಮ ಮೋಕ್ಷಾಣಾಂ ಉಪದೇಶ
ಸಮನ್ವಿತಂ
ಪುರಾವೃತ್ತಂ ಕಥಾಯುಕ್ತಂ ಇತಿಹಾಸಂ
ಪ್ರಚಕ್ಷತೇ

ಇತಿಹಾಸದ ಮುಖ್ಯ ಪ್ರಯೋಜನವೆಂದರೆ ಅದು ನಮ್ಮ ಜೀವನದ ಮೌಲ್ಯಗಳನ್ನು ರೂಪಿಸಿಕೊಳ್ಳುವ, ಜೀವನವನ್ನು ಸುಧಾರಿಸಿಕೊಳ್ಳುವ ಒಂದು ಸಾಧನ. ಹಿಂದಿನ ಘಟನೆಗಳು, ವ್ಯಕ್ತಿಗಳ ನಡುವಳಿಕೆಗಳು ನಮಗೆ ಮಾರ್ಗದರ್ಶಕವಾಗಿರುತ್ತವೆ. ಹಾಗಾಗುವಂತೆ ನಾವು ಅರಿತುಕೊಳ್ಳಬೇಕು. ನಮ್ಮ ಮುನ್ನಡೆಗೆ ಮಾರ್ಗ ದರ್ಶಕವಾಗಬೇಕು. ಅವುಗಳ ಹಿನ್ನೆಲೆಯಲ್ಲಿ ನಾವು ನಮ್ಮ ವೈಯಕ್ತಿಕ ಮತ್ತು ಸಾಮಾಜಿಕ ಜೀವನವನ್ನು ರೂಪಿಸಿಕೊಳ್ಳಬೇಕು. ಹೀಗೆಂದ ಮಾತ್ರಕ್ಕೆ ನೀತಿ ಪಾಠಗಳನ್ನು ಹೇಳುವ ಕತೆಗಳಷ್ಟೇ ಇತಿಹಾಸವೆಂದಲ್ಲ. ನಮ್ಮ ಜೀವನದ ಮೇಲೆ ಪ್ರಭಾವ ಬೀರುವಂಥ ಘಟನೆ ಗಳ ವಿವರಗಳೇ ಇತಿಹಾಸ, ಪುರಾವೃತ್ತ. ಅಂಥ ಘಟನೆ ಗಳು ಇಂದಿಗೆ ನಮಗೆ ಪ್ರಯೋಜನವಾಗುವಂತೆ ಅರ್ಥ ಮಾಡಿಕೊಳ್ಳಬೇಕು. ಇಲ್ಲವಾದರೆ ಇತಿಹಾಸ ಬರೇ ಹೆಸರುಗಳ, ತಾರೀಖುಗಳ ಸರಮಾಲೆಯಾಗುತ್ತದೆ. ಅದರ ಓದು ಬೇಸರ ತರಿಸುತ್ತದೆ.

ಒಂದು ಉದಾಹರಣೆಯನ್ನು ನೋಡಬಹುದು. ಬಹುಹಿಂದೆ ನಮ್ಮ ದೇಶದ ಮೇಲೆ ಅಲೆಗ್ಝಾಂಡರ್ ಎಂಬ ಗ್ರೀಕ್ ಅರಸನು ದಾಳಿ ಮಾಡಿದನೆಂಬುದನ್ನು ಪದೇ ಪದೇ ಓದುತ್ತೇವೆ. ಆಗ ಅಲ್ಲಿದ್ದ ಚಿಕ್ಕ ರಾಜ್ಯಗಳು ಪಟಪಟನೆ ಅವನ ದಾಳಿಗೆ ತುತ್ತಾದವು. ಅಂಭಿಯೆಂಬ ಒಬ್ಬ ರಾಜನು ತನ್ನ ದಾಯಾದಿಯ ಮೇಲೆ ಸೇಡು ತೀರಿಸಿ ಕೊಳ್ಳಲು ಈ ಪರಕೀಯನಿಗೆ ಬೆಂಬಲವಾಗಿ ನಿಂತನು. ಪೋರಸ್ ಎಂಬ ಅರಸನು ಅಲೆಗ್ಝಾಂಡರನನ್ನು ಎದುರಿಸಿ ದನು. ಯುದ್ಧದಲ್ಲಿ ಸೋತರೂ ಧೀರನಂತೆ ನಡೆದನು. ಆಯಿತು ಮುಂದೇನು ? ಹಿಂದೇನೊ ಆಯಿತು. ಅದರಿಂದ ಇಂದು ಉಪಯೋಗವೇನು ಎಂದರಾಗದು. ಭಾರತದ ಮೇಲೆ, ಭಾರತೀಯರ ಮೇಲೆ ಅದರ ಪರಿಣಾಮವೇನಾಯಿತು ? ಅದರಿಂದ ನಾವೇನು ಕಲಿಯ ಬಹುದು ಎಂಬುದನ್ನು ಬಿಂಬಿಸುವುದರಲ್ಲಿ ಇತಿಹಾಸ ಶಿಕ್ಷಣದ ಮರ್ಮ ಅಡಗಿದೆ.

ಈ ಘಟನೆ ಅಂದಿನ ಅನೇಕ ವಿಚಾರವಂತರ ಕಣ್ಣು ತೆರೆಯಿತು. ಅಂದಿನ ಚಿಕ್ಕ ಚಿಕ್ಕ ರಾಜ್ಯಗಳ ಬಲ ಹೀನತೆ, ಅವುಗಳ ನಡುವಿನ ಈರ್ಷ್ಯೆ, ಒಗ್ಗಟ್ಟಿನ ಅಭಾವ ಪರಕೀಯರ ಆಕ್ರಮಣಕ್ಕೆ ಕಾರಣವಾಯಿತೆಂಬ ಸತ್ಯದ ಅರಿವಾಯಿತು. ಒಗ್ಗಟ್ಟಿನ ಮಹತ್ವ ಮನದಟ್ಟಾ ಯಿತು. ಕೌಟಿಲ್ಯನಂಥ ಮೇಧಾವಿಯೊಬ್ಬ ತಲೆಯೆತ್ತಿದ. ದೇಶವು ಪರಕೀಯರ ಆಕ್ರಮಣಕ್ಕೆ ತುತ್ತಾದರೆ ಬಡ ವಾಗುತ್ತದೆಂದು ಸಾರಿ ಹೇಳಿದ. ಚಂದ್ರಗುಪ್ತನಂಥ ಒಬ್ಬ ನಾಯಕ ದೊರೆತ. ಜನರು ಒಗ್ಗೂಡಿದರು. ಅಲೆಗ್ಝಾಂಡರ್ ಹಿಮ್ಮೆಟ್ಟಿದ. ದೇಶ ಸ್ವತಂತ್ರವಾಯಿತು. ಅಫಘಾನಿಸ್ತಾನದಿಂದ ಹಿಡಿದು ಕಾವೇರಿಯವರೆಗೆ ವಿಶಾಲವಾದ ಸಾಮ್ರಾಜ್ಯ ಸ್ಥಾಪಿತವಾಯಿತು. ಕೌಟಿಲ್ಯ ಅರ್ಥಶಾಸ್ತ್ರದ ರೂಪದಲ್ಲಿ ಈ ಸಾಮ್ರಾಜ್ಯಕ್ಕೆ, ಮುಂದಿನ ಎಲ್ಲ ರಾಜ್ಯಗಳಿಗೆ ರಾಜಘಟನೆಯನ್ನು ಒದಗಿ ಸಿದ. ಪ್ರಜಾಸುಖ, ಪ್ರಜಾಹಿತ ಈ ಘಟನೆಯ ಮೂಲಸೂತ್ರಗಳಾದವು.

ಹೀಗೆ ಬರೀ ಘಟನೆಗಳನ್ನು ವಿವರಿಸಿದೆ. ಘಟನೆಗಳ ಹಿಂದಿರಬಹುದಾದ ಪರಿಣಾಮಗಳನ್ನು ಸೂಚ್ಯವಾಗಿ ವಿವರಿಸಿದರೆ ಅಧ್ಯಯನ ರೋಚಕವಾಗುತ್ತದೆ, ಪ್ರಯೋಜನಕಾರಿಯಾಗುತ್ತದೆ. ಇಂತಹ ಇನ್ನೂ ಅನೇಕ ಉದಾಹಾರಣೆಗಳನ್ನು ಕೊಡಬಹುದು.

ಇತಿಹಾಸದ ಅಧ್ಯಾಪನದಲ್ಲಿ ಇನ್ನೊಂದು ಮಹತ್ವದ ಅಂಶವೆಂದರೆ ಆ ಕ್ಷೇತ್ರದಲ್ಲಿ ಆದ ಹೊಸ ಹೊಸ ಸಂಶೋಧನೆಗಳನ್ನು, ಹೊಸ ಹೊಸ ವಿಷಯಗಳನ್ನು ಅವಗತ ಮಾಡಿಕೊಳ್ಳುವುದು. ಇವಿಲ್ಲದೆ ಹೋದರೆ ಮತ್ತೆ ಇತಿಹಾಸದ ಅಭ್ಯಾಸ ಚರ್ವಿತ ಚರ್ವಣವೇ ಆಗುತ್ತದೆ. ಒಂದು ಉದಾಹರಣೆಯನ್ನು ನೋಡಬಹುದು. ನಮ್ಮ ದೇಶದ ತೀರ ಪ್ರಾಚೀನ ಕಾಲದ ಇತಿಹಾಸವನ್ನು ಓದುವಾಗ ಆರ್ಯರೆಂಬವರು ಹೊರಗಿನಿಂದ ಬಂದವರು ಎಂಬುದನ್ನು ಓದುತ್ತೇವೆ. ಕಳೆದ ಎಷ್ಟೋ ವರ್ಷಗಳಿಂದ ಇದೇ ಮಾತೇ ನಮ್ಮ ಪಠ್ಯಪುಸ್ತಕಗಳಲ್ಲಿ ಬರುತ್ತದೆ. ಅಲ್ಲದೆ ಇದೊಂದು ಅಬಾಧಿತವಾದ ಸಿದ್ಧಾಂತ ಎಂಬ ನಂಬಿಕೆ ಬಲವಾಗಿ ಬೇರೂರಿದೆ. ಆದರೆ ಇತ್ತೀಚೆಗೆ ಈ ಸಿದ್ಧಾಂತವನ್ನು ಪ್ರಶ್ನಿಸುವ ಮತ್ತು ಅಲ್ಲಗಳೆಯುವಂತಹ ಸಂಶೋಧನೆಗಳು ನಡೆದಿವೆ. ಆ ದ ರೆ ಈಗ ಹಲವು ವರ್ಷಗಳಿಂದಲೂ ಇಂತಹ ಹೊಸ ವಿಚಾರಗಳು ಪ್ರಚಲಿತವಿದ್ದರೂ ಅವು ವಿದ್ಯಾರ್ಥಿಗಳನ್ನು ಮತ್ತು ಸಾಮಾನ್ಯ ಓದುಗರನ್ನು ಮುಟ್ಟಿಯೇ ಇಲ್ಲ. ಅದಕ್ಕಾಗಿ ಶಿಕ್ಷಕರಿಗೆ ಹೊಸ ಹೊಸ ವಿಚಾರಗಳು ಮನದಟ್ಟಾಗುವಂತೆ Orientation Course ಅಥವಾ Refresher Course ಗಳನ್ನು ಏರ್ಪಡಿಸುವುದು ಅಗತ್ಯವಾಗಿದೆ. ಇಂಥ ಕೋರ್ಸುಗಳಲ್ಲಿ ಹೊಸ ಹೊಸ ವಿಷಯಗಳನ್ನು ಯುವ ಶಿಕ್ಷಕರ ಗಮನಕ್ಕೆ ತರುವ ಪ್ರಯತ್ನಗಳು ನಡೆದು ಇತಿಹಾಸದ ಅರ್ಥಪೂರ್ಣ ಅಭ್ಯಾಸವು ಸಾಧ್ಯವಾಗುತ್ತದೆ. ಇತಿಹಾಸ ಒಂದು torch ಇದ್ದಂತೆ. ಕತ್ತಲಲ್ಲಿ ಮುಂದೆ ನಡೆಯುತ್ತಿರುವ ಮನುಷ್ಯನೊಬ್ಬನಿಗೆ ಹಿಂದಿಂದ ಬೆಳಕಿನ ಕಿರಣವೊಂದು ಬಂದು ಆತನಿಗೆ ದಾರಿ ಸರಿಯಾಗಿ ಕಾಣುವಂತೆ, ಇತಿಹಾಸ ಮನುಷ್ಯನಿಗೆ ಸರಿಯಾದ ಮಾರ್ಗದಲ್ಲಿ ಮುನ್ನಡೆಯುವಂತೆ ಮಾರ್ಗದರ್ಶನ ಮಾಡುತ್ತದೆ.

ಕರ್ನಾಟಕ ಇತಿಹಾಸ ಅಕಾದೆಮಿ ಇತಿಹಾಸವನ್ನು ಜನಪ್ರಿಯಗೊಳಿಸಲು ಈಗಾಗಲೇ ಒಂದು ಹೊಸ ಬಗೆಯ ಕಾರ್ಯಕ್ರಮ ನಡೆಸುತ್ತಿದೆ. ಅದೆಂದರೆ ಇತಿಹಾಸದ ಪರೀಕ್ಷೆಗಳನ್ನು ನಡೆಸುವುದು. ಇದರ ಪರಿಣಾಮ ಬಹಳ ಉತ್ತೇಜನಕಾರಿಯಾಗಿದೆ ಎಂದು ಕೇಳಿದ್ದೇನೆ. ಈ ಅಕಾದೆಮಿ ಅಲ್ಪಾವಧಿಯ ತರಬೇತಿ ಕೇಂದ್ರಗಳನ್ನು ನಡೆಸಿ ತನ್ಮೂಲಕ ಇತಿಹಾಸ ಕ್ಷೇತ್ರದಲ್ಲಿ ಆಗುತ್ತಿರುವ ಹೊಸ ಹೊಸ ಬೆಳವಣಿಗೆಗಳನ್ನು ಶಿಕ್ಷಕರ ಗಮನಕ್ಕೆ ತರುವ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಬೇಕೆಂದು ಸೂಚಿಸಬಯಸುತ್ತೇನೆ.

ಈ ಸಂದರ್ಭದಲ್ಲಿ ಇನ್ನೊಂದು ವಿಷಯವನ್ನು ನಿಮ್ಮ ಗಮನಕ್ಕೆ ತರಬಯಸುತ್ತೇನೆ. ಅದೆಂದರೆ ಶಿಕ್ಷಣ ಮಾಧ್ಯಮ. ನಮ್ಮ ದೇಶದಲ್ಲಿ ಬಹುತೇಕ ರಾಜ್ಯಗಳು ಪ್ರಾದೇಶಿಕ ಭಾಷೆಯನ್ನು ಶಿಕ್ಷಣ ಮಾಧ್ಯಮವನ್ನಾಗಿ ಆರಿಸಿಕೊಂಡಿವೆ. ಕರ್ನಾಟಕದಲ್ಲಿಯೂ ಕಾಲೇಜು ಹಂತದವರೆಗೆ ಕನ್ನಡ ಮಾಧ್ಯಮ ಇದೆ. ಇತ್ತೀಚೆಗೆ ವಿಶ್ವವಿದ್ಯಾಲಯಗಳಲ್ಲಿ ಪರೀಕ್ಷೆಗಳಲ್ಲಿ ಪ್ರಶ್ನಪತ್ರಿಕೆಗಳಿಗೆ ಕನ್ನಡದಲ್ಲಿ ಉತ್ತರ ಬರೆಯಲು ಆಸ್ಪದ ಮಾಡಿಕೊಟ್ಟಿದ್ದಾರೆ. ಇತಿಹಾಸದ ಮಟ್ಟಿಗೆ ಹೇಳಬೇಕಾದರೆ, ಮುಕ್ಕಾಲು ಪಾಲು ಜನ ಕನ್ನಡವನ್ನೇ ಆರಿಸಿಕೊಳ್ಳುತ್ತಾರೆ ಎಂಬುದು ನನ್ನ ಅನುಭವದ ಮಾತು. ತಾತ್ವಿಕವಾಗಿ ಇದು ಸ್ವಾಗತಾರ್ಹವೆ. ಮಾತೃಭಾಷೆಯ ಮೂಲಕ ಬೋಧನೆ, ಮಾತೃಭಾಷೆಯ ಮೂಲಕ ಅಭಿವ್ಯಕ್ತಿ ಇವು ಹೆಚ್ಚು ಪರಿಣಾಮಕಾರಿಯಾಗುತ್ತವೆ ಎಂದು ನಾವು ಭಾವಿಸಿದ್ದೇವೆ. ಎಷ್ಟೋ ಸಲ ಇಂತಹ ಅನುಭವವೂ ನಮಗಾಗುತ್ತದೆ. ಆದರೆ ಇಲ್ಲಿ ಕೆಲವು ವ್ಯಾವಹಾರಿಕ ತೊಂದರೆಗಳಿವೆ. ಒಂದೆಂದರೆ, ಕಲಿಸುವವರಿಗೆ ಭಾಷೆಯ ಮೇಲಿನ ಪ್ರಭುತ್ವ ಚೆನ್ನಾಗಿರಬೇಕಾಗುತ್ತದೆ. ಉತ್ತರ ಬರೆಯುವವರಿಗೂ ಅಷ್ಟೇ. ಪ್ರಾಮಾಣಿಕವಾಗಿ ನನ್ನ ಅನುಭವವನ್ನು ಹೇಳಬೇಕೆಂದರೆ ನಾವು ಹೆಚ್ಚಾಗಿ ಇವೆರಡರ ಕೊರತೆಗಳನ್ನು ಕಾಣುತ್ತೇವೆ. ಅಪವಾದಗಳಿಲ್ಲವೆಂದಲ್ಲ. ಇನ್ನೊಂದು ಮಾತೆಂದರೆ ಕನ್ನಡ ಮಾಧ್ಯಮವನ್ನು ಆರಿಸಿಕೊಂಡ ಜನ ಕನ್ನಡದಲ್ಲಿರುವ ಪುಸ್ತಕಗಳನ್ನೇ ಬೇಡುತ್ತಾರೆ, ಓದುತ್ತಾರೆ. ಆದರೆ ಕನ್ನಡದಲ್ಲಿ ಉನ್ನತಮಟ್ಟದ ಪುಸ್ತಕಗಳು ಎಷ್ಟು ದೊರೆಯುತ್ತವೆ. ಬರೆಯಬೇಕು, ಭಾಷಾಂತರಿಸಬೇಕು ಎಂದೇನೊ ಅನೇಕರು ಹೇಳುತ್ತಾರೆ. ಆದರೆ ಒಂದು ಐತಿಹಾಸಿಕ ಸತ್ಯವೆಂದರೆ ಈಗಾಗಲೇ ಇಂಗ್ಲೀಷಿನಲ್ಲಿ ಇತಿಹಾಸದ ಬಗ್ಗೆ ಶ್ರೇಷ್ಠ ಲೇಖಕರ ಅಸಂಖ್ಯ ಪುಸ್ತಕಗಳಿವೆ. ಇಂತಹ ಪುಸ್ತಕಗಳನ್ನು ಸ್ವತಂತ್ರವಾಗಿ ಬರೆಯಲು, ಅವು

ವಿದ್ಯಾರ್ಥಿಗಳಿಗೆ ಶಿಕ್ಷಕರಿಗೆ ಲಭ್ಯವಾಗಲು ಎಷ್ಟು ವರ್ಷ ಬೇಕಾದೀತು ? ಅಲ್ಲದೆ ಎಷ್ಟೆಂದು ಇಂತಹ ಪುಸ್ತಕಗಳನ್ನು ಭಾಷಾಂತರಿಸಲಾದೀತು ? ಅದಲ್ಲದೆ ಒಂದು ಪುಸ್ತಕವನ್ನು ಒಂದು ಭಾಷೆಯಿಂದ ಇನ್ನೊಂದು ಭಾಷೆಗೆ ಭಾಷಾಂತರಿಸಿದಾಗ ಒಂದರಲ್ಲಿಯ ವಿಷಯವನ್ನು ಇನ್ನೊಂದರಲ್ಲಿ ಇಡುತ್ತೇವಷ್ಟೆ. ಆದರೆ ಮೂಲ ಲೇಖಕರ ಶೈಲಿ, ಅವರ ಭಾಷೆಯ ಸೊಗಸು. ಅವರು ವಿಚಾರಗಳನ್ನು ಮಂಡಿಸುವ ರೀತಿ ಇವೆಲ್ಲವುಗಳನ್ನು ಒಂದು ಭಾಷೆಯಿಂದ ಇನ್ನೊಂದು ಭಾಷೆಗೆ ಎಷ್ಟರ ಮಟ್ಟಿಗೆ ತರಲಾದೀತು ? ಮೂಲ ಲೇಖಕರ ಗ್ರಂಥಗಳನ್ನು ಓದುವದರಿಂದ ನಮ್ಮ ಮನಸ್ಸಿನ ಮೇಲೆ, ನಮ್ಮ ಭಾಷೆಯ ಮೇಲೆ, ನಮ್ಮ ವಿಚಾರಶಕ್ತಿಯ ಮೇಲೆ ಆಗುವ ಪರಿಣಾಮ ಭಾಷಾಂತರಗಳಿಂದಾದೀತೆ ? ಆಗಲಾರದು ಎಂದು ನನ್ನ ಅನುಭವ. ಆದ್ದರಿಂದ ಬರೀ ಭಾಷಾಂತರಗಳನ್ನು ಓದುವುದರಿಂದ ನಾವು ಅನೇಕ ಉತ್ತಮ ಅನುಭವಗಳಿಂದ ವಂಚಿತರಾಗುತ್ತೇವೆ. ವಿಲ್ ಡುರ್‍ಯಾಂಟ್, ಟಾಯನ್‌ಬಿ ಇವರು ಹೋಗಲಿ, ಈಚಿನ ವಿದ್ವಾಂಸರಾದ ಡಾ॥ ರಾಧಾಕೃಷ್ಣನ್, ಜವಾಹರಲಾಲ್ ನೆಹರೂ, ಆರ್.ಸಿ. ಮುಜುಮದಾರ, ನೀಲಕಂಠಶಾಸ್ತ್ರಿ ಯವರಂಥವರ ಗ್ರಂಥಗಳನ್ನು ಮೂಲದಲ್ಲಿ ಓದುವ ಸೊಗಸೇ ಬೇರೆ, ಭಾಷಾಂತರಗಳ ಪರಿಣಾಮವೇ ಬೇರೆ ಎಂಬುದು ಎಲ್ಲರ ಅನುಭವವಾಗಿರಲು ಸಾಕು. ಇಲ್ಲಿ ಇನ್ನೂ ಒಂದು ಅಂಶವನ್ನು ಗಮನಿಸಬೇಕು. ವಿದ್ಯಾರ್ಥಿಗಳು ಕನ್ನಡದಲ್ಲಿಯೇ ಕಲಿಯುತ್ತಿರುವಾಗ ಕನ್ನಡ ಪುಸ್ತಕಗಳನ್ನೇ ಹೆಚ್ಚು ಅಪೇಕ್ಷಿಸುವರಾದ್ದರಿಂದ ಕಲಿಸುವ ಶಿಕ್ಷಕರೂ ಸಹ ಕೇವಲ ಕನ್ನಡ ಪುಸ್ತಕಗಳನ್ನಷ್ಟೇ ಅವಲಂಬಿಸುತ್ತಾರೆಂಬುದು ನನ್ನ ಅನುಭವದ ಮಾತಾಗಿದೆ. ಇದರಿಂದ ಇನ್ನೂ ಹೆಚ್ಚಿನ ಹಾನಿಯುಂಟಾಗುತ್ತದೆ. ಕನ್ನಡ ಮಾಧ್ಯಮದ ಬಗ್ಗೆ ನನ್ನ ವಿರೋಧವಿಲ್ಲ. ಆದರೆ ಇತಿಹಾಸದ ಆಳವಾದ ಮತ್ತು ವಿಸ್ತಾರವಾದ ಜ್ಞಾನವನ್ನು ಪಡೆಯಲು ಇಂಗ್ಲೀಷ್ ಗ್ರಂಥಗಳ ಸಹಾಯ ಪಡೆಯುವುದು ಅನಿವಾರ್ಯ ಎಂಬುದು ನನ್ನ ದೃಢ ನಂಬಿಕೆ. ವಸ್ತುಸ್ಥಿತಿ ನನಗೆ ಬೇರೆಯೇ ಕಾಣುತ್ತದೆ. ಅನೇಕ ವಿದ್ಯಾರ್ಥಿಗಳು ನನ್ನ ಕಡೆಗೆ ಬರುತ್ತಾರೆ. ಕನ್ನಡ ಪುಸ್ತಕಗಳನ್ನಷ್ಟೇ ಕೇಳುತ್ತಾರೆ. ಅವರಿಗೂ ನಾನು ಈ ವಿಷಯವನ್ನು ತಿಳಿಸುತ್ತೇನೆ. ಆದರೆ ಅವರಿಗೆ ಹಿಡಿಸುವುದಿಲ್ಲ. ಉಚ್ಚ ತರಗತಿಯ ವಿದ್ಯಾರ್ಥಿಗಳಿಗೆ, ಶಿಕ್ಷಕರಿಗೆ ನನ್ನ ಕಳಕಳಿಯ ಬಿನ್ನಹವೆಂದರೆ ನಿಮ್ಮ ತಿಳುವಳಿಕೆಯ ಕ್ಷೇತ್ರವನ್ನು ನೀವಾಗಿಯೇ ಸಂಕುಚಿತಗೊಳಿಸಿಕೊಳ್ಳಬೇಡಿರಿ. ಇಂಗ್ಲೀಷ್ ಓಡಿಸಿದರೆ ಕನ್ನಡ ಉಳಿಯುತ್ತದೆ ಎಂದು ಕೆಲವರು ನಂಬಿದಂತಿದೆ. ಆದರೆ ಇಂತಹ ನಂಬಿಕೆ ಆತ್ಮಘಾತಕವೇ ಸರಿ. ಕನ್ನಡದಲ್ಲಿ ಉತ್ತಮವಾಗಿ ಬರೆಯಲು ಬರಬೇಕಾದರೆ ಅದನ್ನು ನಾವು ಚೆನ್ನಾಗಿ ಕೃಷಿ ಮಾಡಬೇಕಾಗುತ್ತದೆ. ಅದಕ್ಕೆ ಇಂಗ್ಲೀಷು ಪೂರಕವಾಗುತ್ತದೆ. ಸಂಸ್ಕೃತವು ಸಹಾಯಕವಾಗುತ್ತದೆ. ಇತರ ಭಾಷೆಗಳೂ ಪುಷ್ಟಿಕೊಡುತ್ತವೆ "ಆನೋ ಭದ್ರಾ ಕ್ರತವೋ ಯಂತು ವಿಶ್ವತಃ" ಎಂಬ ಮಂತ್ರವು ನಮಗೆ ಗುರುವಾಗಿರಲಿ. "ಬಹುಸುತಾ ಅಸು ಬಹುಸ್ರುತಾ ಭವಂತು" ಎಂಬ ಅಶೋಕನ ಮಾತು ಸದಾ ನೆನಪಿರಲಿ.

೨. ಇತಿಹಾಸ ಸಂಶೋಧನೆ : ಕರ್ನಾಟಕದಲ್ಲಿ ಇತಿಹಾಸ ಸಂಶೋಧನೆಯ ಪರಂಪರೆಯ ದೃಷ್ಟಿಯಿಂದ ನಾವು ಸುದೈವಿಗಳೆಂದೇ ಹೇಳಬೇಕು. ತುಲನಾತ್ಮಕವಾಗಿ ನೋಡಿದರೆ ನಮ್ಮಲ್ಲಿ ಇತಿಹಾಸ ಸಂಶೋಧನೆ ಚಟುವಟಿಕೆಗಳು ಹೆಚ್ಚು ಹಿಂದಿನಿಂದಲೇ ಮತ್ತು ಹೆಚ್ಚು ವ್ಯಾಪಕವಾಗಿ ಇಲ್ಲಿ ನಡೆಯುತ್ತ ಬಂದಿದೆ ಎಂಬುದು ಸ್ಪಷ್ಟವಿದೆ. ನಮ್ಮಲ್ಲಿಯ ವಿಪುಲವಾದ ಶಾಸನಸಂಪತ್ತು ವಿದೇಶಿ ವಿದ್ವಾಂಸರನ್ನು ಆಕರ್ಷಿಸಿದುದೇ ಇದಕ್ಕೆ ಮುಖ್ಯ ಕಾರಣವೆನಿಸುತ್ತದೆ. ಶಾಸನ ಸಂಶೋಧನೆಯ ಕಾರ್ಯ ನಮ್ಮ ನಾಡಿನಲ್ಲಿ ೧೯ನೇ ಶತಮಾನದ ಕೊನೆಯ ಭಾಗದಿಂದಲೇ ಆರಂಭವಾಗಿದೆ. ಇದರ ಬೆಳವಣಿಗೆಯನ್ನು ಹಂತ ಹಂತವಾಗಿ ಗುರುತಿಸಬಹುದಾಗಿದೆ. ಫ್ಲೀಟ್ ಮತ್ತು ರೈಸರ ಕಾಲ ಈ ಬೆಳವಣಿಗೆಯ ಮೊದಲನೆಯ ಹಂತ. ಇದು ಶಾಸನ ಸಂಶೋಧನೆಗೆ ಭದ್ರವಾದ ಬುನಾದಿಯನ್ನು ಒದಗಿಸಿದ ಹಂತ. ಉತ್ತರಕರ್ನಾಟಕದಲ್ಲಿ ಜಾನ್ ಫ್ಲೀಟ್, ದಕ್ಷಿಣ ಕರ್ನಾಟಕದಲ್ಲಿ ಬೆಂಜಾಮಿನ್ ಲೂಯಿ ರೈಸ್ ಅವರು ಈ ಕಾರ್ಯವನ್ನು ಆರಂಭಿಸಿದರು. ಇದರ ಪರಿಣಾಮವಾಗಿ Epigraphia Carnaticaದ ೧೨ ಸಂಪುಟಗಳು ಹೊರಬಂದವು. ಕರ್ನಾಟಕದ ಇತಿಹಾಸದ ಸಂಶೋಧನೆಗೆ ಅಕ್ಷಯ ಭಂಡಾರ ದೊರೆಯಿತು. ಅಂದಿನ ಮೈಸೂರು

ಸಂಸ್ಥಾನದ ಎಲ್ಲ ಜಿಲ್ಲೆಗಳಲ್ಲಿಯೂ ಸುಮಾರು ೧೨ ಸಾವಿರಕ್ಕೂ ಹೆಚ್ಚಿನ ಶಾಸನಗಳನ್ನು ಈ ಸಂಪುಟಗಳು ಒಳಗೊಂಡಿವೆಯೆಂದರೆ ಈ ಸಾಮಗ್ರಿಯ ವೈಪುಲ್ಯ ನಮಗೆ ಮನದಟ್ಟಾಗುತ್ತದೆ. ಫ್ಲೀಟರ ಕಾರ್ಯ ವೈಖರಿಯೇ ಬೇರೆ. ತಾವು ಕಂಡುಹಿಡಿದ ಒಂದೊಂದು ಶಾಸನವನ್ನು ಕೂಲಂಕಷವಾಗಿ ವಿಮರ್ಶಿಸಿ Sanskrit-Prakrit and Old Kanarese Inscriptions ಎಂಬ ಮಾಲಿಕೆಯನ್ನು, Indian Antiquary ಯಲ್ಲಿ ನೂರಾರು ಲೇಖನಗಳನ್ನು ಪ್ರಕಟಪಡಿಸಿದರು. ಇವು ಒಂದು ಅಕ್ಷಯ ಭಂಡಾರವೇ. ಈ ಲೇಖನಗಳಿಂದಾಗಿ ಅವರು ಇಂದಿನ ಶಾಸನ ಸಂಶೋಧಕರಿಗೆ ಮಾರ್ಗದರ್ಶಕ ರಾದರು. ಇದೇ ದಾಟಿಯಲ್ಲಿಯೇ ಶಾಸನ ಸಂಶೋಧನೆ ಯಲ್ಲಿ ಬೆಳೆದ ಮುಂದಿನ ಹಂತವೆಂದರೆ ೨೦ನೇ ಶತ ಮಾನದ ಆದಿಭಾಗ. ಎನ್. ಲಕ್ಷ್ಮೀನಾರಾಯಣ ರಾವ್, ಆರ್. ಎಸ್. ಪಂಚಮುಖಿ ಈ ಹಂತದ ಪ್ರಮುಖರು. South Indian Inscriptions ಎಂಬ ಮಾಲಿಕೆಯಲ್ಲಿ Bombay Karnataka Inscriptions ಎಂಬ ಸಂಪುಟಗಳ ಮೂಲಕ ಉತ್ತರ ಕರ್ನಾಟಕದ ಶಾಸನಗಳ ಪ್ರಕಟಣೆ ಆರಂಭವಾದುದು. ಆಗಲೆ. ಈ ಕಾಲದಲ್ಲಿ ಪ್ರಕಟಣೆಗಿಂತ ಸಂಗ್ರಹ ಕಾರ್ಯವೇ ಹೆಚ್ಚಾಯಿತು. ಉತ್ತರ ಕರ್ನಾಟಕದ ಧಾರವಾಡ, ವಿಜಾಪುರ ಜಿಲ್ಲೆಗಳ ಬಹುಪಾಲು ಶಾಸನ ಗಳು ಈ ಕಾಲದಲ್ಲಿ ಸಂಗ್ರಹಿತವಾದವು. ಈ ಸಂಗ್ರಹ ನಂತರದ ಹಂತದಲ್ಲಿ South Indian Inscriptions, Vol, XV XVIII, & XX ಈ ಸಂಪುಟಗಳಲ್ಲಿ ಸುಮಾರುಹದಿನೈದುನೂರಕ್ಕೂಹೆಚ್ಚು ಶಾಸನಗಳು ಪ್ರಕಟ ವಾದವು. ಡಾ|| ಪಿ. ಬಿ. ದೇಸಾಯಿ ಡಾ|| ಜಿ. ಎಸ್. ಗಾಯಿ ಈ ಹಂತದ ಪ್ರಮುಖರೆನ್ನಲು ಅಡ್ಡಿಯಿಲ್ಲ. ಡಾ|| ಪಿ. ಬಿ. ದೇಸಾಯಿ ವಿಶೇಷ ಕೊಡುಗೆಯೆಂದರೆ ಅಂದಿನ ಹೈದರಾಬಾದ್ ಕರ್ನಾಟಕದ ಗುಲ್ಬರ್ಗಾ, ರಾಯಚೂರು ಜಿಲ್ಲೆಗಳಲ್ಲಿಯ ಭಂಡಾರದ ಬಿಗಿಮುದ್ರೆ ಯನ್ನು ಒಡೆದುದು. ಅವರು ಪ್ರಕಟಿಸಿದ ಈ ಭಾಗಗಳ ಲ್ಲಿಯ ಶಾಸನಗಳ ಸಂಖ್ಯೆ ಬಹಳವಲ್ಲದಿದ್ದರೂ ಆ ಭಂಡಾ ರದ ಐಶ್ವರ್ಯದ ಮುನ್ಸೂಚನೆಯನ್ನು ಅವರಿತ್ತರು.

ಇನ್ನು ಮುಂದಿನ ಹಂತ ಸದ್ಯದ ಹಂತ. ಈ ಕಾಲದಲ್ಲಿ ಆಧುನಿಕ ಕರ್ನಾಟಕ ರಾಜ್ಯದ ನಿರ್ಮಾಣ ವಾಯಿತು. ಶಾಸನ ಸಂಗ್ರಹದವ್ಯಾಪ್ತಿಯೂ ಹೆಚ್ಚಿತು. ಗುಲ್ಬರ್ಗಾ, ರಾಯಚೂರ ಜಿಲ್ಲೆಗಳಲ್ಲಿ ಶಾಸನ ಸಂಗ್ರಹ ಕಾರ್ಯ ಶುರುವಾಗಿ ಹೊಸ ಹೊಸ ವಿಷಯಗಳನ್ನು ತಿಳಿಸುವ ಬಹಳಷ್ಟು ಶಾಸನಗಳು ಬೆಳಕಿಗೆ ಬಂದವು. ಈ ಹಂತದಲ್ಲಿಯ ಒಂದು ಮಹತ್ವದ ಬೆಳವಣಿಗೆಯೆಂದರೆ ಸರ್ಕಾರದ ಕಾರ್ಯಾಲಯಕ್ಕೆ ಸೀಮಿತವಾಗಿದ್ದ ಶಾಸನ ವಿಜ್ಞಾನದ ಅಭ್ಯಾಸ, ಸಂಶೋಧನೆ ವಿಶ್ವವಿದ್ಯಾಲಯಗಳ ಬಾಗಿಲಿಗೆ ಬಂದಿತು. ಶಾಸನವಿಜ್ಞಾನ ಒಂದು ಪಠ್ಯ ಕ್ರಮವಾಗಿ ವಿದ್ಯಾರ್ಥಿಗಳಿಗೆ ತರಬೇತಿ ದೊರೆಯತೊಡ ಗಿತು. ಒಂದು ರೀತಿಯಿಂದ ಈ ಅಭ್ಯಾಸ ವಿಸ್ತಾರ ಹೆಚ್ಚಿದರೂ ಇನ್ನೊಂದು ರೀತಿಯಿಂದ ಆಳ ಕಡಿಮೆ ಯಾಗತೊಡಗಿತು. ಶಾಸನ ಸಂಶೋಧನೆಗೆ ಭದ್ರ ತಳ ಹದಿ ಭಾಷೆಗಳು. ಒಮ್ಮೊಮ್ಮೆ ಶಾಸನವಿಜ್ಞಾನವೆಂದರೆ ಶಿಲಾಲಿಪಿಗಳಲ್ಲಿಯ ಅಕ್ಷರಗಳನ್ನೋದಿದರಾಯಿತು, ಎಂದು ಕಲ್ಪಿಸಲಾಗುತ್ತದೆ. ಆದರೆ ಇದು ಸರಿಯಲ್ಲ. ಅಕ್ಷರಗಳನ್ನೇ ಓದುವದು ಪ್ರಾರಂಭಿಕ ಕಾರ್ಯವಷ್ಟೆ. ಶಾಸನವಿಜ್ಞಾನದ ಮಹತ್ವದ ಭಾಗವೆಂದರೆ ಓದಿದ್ದರ ಅರ್ಥವನ್ನು ಸಮರ್ಪಕವಾಗಿ ವಿವರಿಸುವದು. ಈ ಕಾರ್ಯಕ್ಕೆ ಪ್ರಾಕೃತ, ಸಂಸ್ಕೃತ, ಹಳೆಗನ್ನಡಗಳ ಮೇಲಿನ ಪ್ರಭುತ್ವ ಅತ್ಯವಶ್ಯ. ಇವಿಲ್ಲದಿದ್ದಲ್ಲಿ ಶಾಸನಗಳ ಅಭ್ಯಾಸ ವ್ಯರ್ಥವೆ. ಆದರೆ ಇತ್ತೀಚೆಗೆ ಕೆಲವೆಡೆ ಭಾಷಾ ಪ್ರಭು ತ್ವಕ್ಕೆ ಮಹತ್ವವಿದ್ದಂತಿಲ್ಲ. ಭಾಷೆಗಳ ಸಮರ್ಪಕ ಜ್ಞಾನವಿಲ್ಲದೆ ಕಲಿಯುವದಂತೂ ಸರಿಯೇ. ಕಲಿಸು ವವರೂ ಇದ್ದಾರೆ ಎಂಬುದನ್ನು ನಾನು ವಿಷಾದದಿಂದ ಗಮನಿಸಿದ್ದೇನೆ. ಇದರಿಂದ ಏನನ್ನೂ ಸಾಧಿಸಲಾಗುವ ದಿಲ್ಲ ಎಂದು ನಾನು ಹೇಳಿದರೆ ಅಂಥವರು ನನ್ನನ್ನು ಕ್ಷಮಿಸುತ್ತಾರೆಂದು ತಿಳಿದುಕೊಂಡಿದ್ದೇನೆ.

ಬೇರೆಲ್ಲ ರಾಜ್ಯಗಳಿಗಿಂತ ಕರ್ನಾಟಕದಲ್ಲಿ Epigraphy consciousness ಹೆಚ್ಚಿಗೆ ಇದೆ ಎಂದು ನನ್ನ ಭಾವನೆ. ಇದರ ಜೊತೆಗೆ ಭಾಷಾಜ್ಞಾನ ಹೆಚ್ಚ ಬೇಕು. ನಮ್ಮ ಸಾಹಿತ್ಯ, ಪರಂಪರೆ, ಧರ್ಮ ಇವುಗಳ ಪೂರ್ಣ ಪರಿಚಯ ಬೇಕು. ಇವುಗಳನ್ನು ಬೆಳೆಸುವ ಕಾಲವೀಗ ಬಂದಿದೆ. ಶಾಸನವಿಜ್ಞಾನವನ್ನು ಕಲಿಯುವ ವಿದ್ಯಾರ್ಥಿಗೆ ಈ ಭಾಷೆಗಳಲ್ಲಿ ಒಂದು ಪಠ್ಯಕ್ರಮ

ಅತ್ಯಗತ್ಯವಾಗುತ್ತದೆ ಎಂಬುದನ್ನು ಸಂಬಂಧಪಟ್ಟ ವರು ಲಕ್ಷ್ಯದಲ್ಲಿಡುತ್ತಾರೆಂದು ನಾನು ನಂಬಿದ್ದೇನೆ.

ನಮ್ಮ ನಾಡಿನ ಐದಾರು ವಿಶ್ವವಿದ್ಯಾಲಯಗಳ ಪೈಕಿ ಮೈಸೂರು ಮತ್ತು ಕರ್ನಾಟಕ ವಿಶ್ವವಿದ್ಯಾಲಯ ಗಳು ಹಳೆಯವು. ಇತಿಹಾಸ ಸಂಶೋಧನೆಯ ಕಾರ್ಯ ಹೆಚ್ಚಾಗಿ ನಡೆದುದು ಇಲ್ಲಿಯೇ. ಇಲ್ಲಿ ಮತ್ತು ಇತ್ತೀಚೆಗೆ ಸ್ಥಾಪಿತವಾದ ವಿಶ್ವವಿದ್ಯಾಲಯಗಳಲ್ಲಿ ಅನೇಕ ವಿದ್ಯಾರ್ಥಿ ಗಳು Ph. D. ಪದವಿಗಾಗಿ ಅನೇಕ ಐತಿಹಾಸಿಕ ವಿಷಯ ಗಳನ್ನು ಆರಿಸಿಕೊಳ್ಳುತ್ತಾರೆ. ನನ್ನಲ್ಲಿ ಸರಿಯಾದ ಅಂಕಿ ಅಂಶಗಳು ಇಲ್ಲದಿದ್ದರೂ ನಾನು ನೋಡಿದಂತೆ ನಮ್ಮ ವಿಶ್ವವಿದ್ಯಾಲಯಗಳಲ್ಲಿಯ ಸಂಶೋಧನೆಗೆ ಹೆಚ್ಚಾಗಿ ಶಾಸನಗಳೇ ಆಧಾರ. ಏಕೆಂದರೆ ಈ ಸಾಮಗ್ರಿ ವಿಪುಲ ವಾಗಿ ನಮ್ಮಲ್ಲಿಯೇ ದೊರೆಯುತ್ತದೆ. ಹೀಗಾಗಿ ನಮ್ಮಲ್ಲಿ ನಡೆಯುವ ಬಹುಪಾಲು ಸಂಶೋಧನೆಗಳು ೧೪–೧೫ನೇ ಶತಮಾನಕ್ಕೆ ಸೀಮಿತವಾಗಿರುತ್ತವೆ. ಆದರೆ ಕರ್ನಾಟಕದ ಇತಿಹಾಸ ಅದರಾಚೆಗೂ ಇದೆಯಲ್ಲ. ನಮ್ಮಲ್ಲಿ ಕೆಲ ವಿಶ್ವವಿದ್ಯಾಲಯಗಳಲ್ಲಿ ಮಧ್ಯಕಾಲೀನ ಮತ್ತು ಅರ್ವಾಚೀನ ಇತಿಹಾಸಗಳನ್ನು ಕಲಿಸುವ ವ್ಯವಸ್ಥೆ ಯಿದೆ. ಆದರೆ ಈ ಕ್ಷೇತ್ರಗಳಲ್ಲಿ ಸಂಶೋಧನೆ ಬಹ ಳಷ್ಟು ಕಡಿಮೆ ಎಂದು ನನಗನಿಸುತ್ತದೆ. ಶಾಸನಗಳಂತೆ ಈ ಕ್ಷೇತ್ರದಲ್ಲಿ ತಯಾರಿ ಸಾಮಗ್ರಿ (ready material) ಸಿಗದಿರುವದು ಇದಕ್ಕೆ ಒಂದು ಕಾರಣವಾದರೆ ಭಾಷಾ ಜ್ಞಾನದ ಅಭಾವವೂ ಇನ್ನೊಂದು ಕಾರಣ. ಆದರೆ ಸಾಮಗ್ರಿಗೆ ಏನೂ ಕೊರತೆಯಿಲ್ಲ. ಉದಾಹರಣೆಗೆ ಬಹಮನಿ, ಆದಿಲಶಾಹಿ ಸಾಮ್ರಾಜ್ಯಗಳ ಅಭ್ಯಾಸಕ್ಕೆ ವಿಪುಲವಾದ ಅವಕಾಶವಿದೆ. ಆದರೆ ಬಹಳಷ್ಟು ಸಾಮಗ್ರಿ ಇರುವದು ಪರ್ಶಿಯನ್ ಮತ್ತು ಅರೆಬಿಕ್ ಭಾಷೆಗಳಲ್ಲಿ. ಈ ಭಾಷೆಗಳಲ್ಲಿ ನುರಿತ ಇತಿಹಾಸ ಸಂಶೋಧಕರು ನಮ್ಮಲ್ಲಿ ಇಲ್ಲ ಎಂದು ಹೇಳಿದರೂ ಸಲ್ಲು ತ್ತದೆ. ಅದೇ ರೀತಿಯಾಗಿ ಕರ್ನಾಟಕಕ್ಕೆ ಸಂಬಂಧಿಸಿ ದಂತೆ ಪೋರ್ತುಗೀಜರ ಇತಿಹಾಸ. ಇದಕ್ಕೆ ಸಂಬಂಧಿಸಿ ದಂತೆ ಸಾಮಗ್ರಿ ಇರುವದು ಹೆಚ್ಚಾಗಿ ಪೋರ್ತುಗೀಜ್ ಭಾಷೆಯಲ್ಲಿ. ಈ ಭಾಷೆಯನ್ನು ಬಲ್ಲ ನುರಿತ ಇತಿಹಾಸ ಸಂಶೋಧಕರು ಕಡಿಮೆ. ಆದರೆ ಇದರಂತೆ ಕರ್ನಾಟಕ ದಲ್ಲಿ ಮರಾಠರ ಆಡಳಿತ. ಇದಕ್ಕೆ ಸಂಬಂಧಿಸಿದಂತೆ ಸಹಸ್ರಾರು ಕಾಗದ ಪತ್ರಗಳು ಮೋಡಿಲಿಪಿಯಲ್ಲಿವೆ. ಆದರೆ ಈ ಲಿಪಿಯನ್ನು ಓದಬಲ್ಲ ಜನ ಎಷ್ಟು ಇದ್ದಾರೆ? ಹೀಗಾಗಿ ಈ ಕ್ಷೇತ್ರಗಳು ಸಂಶೋಧನೆಯ ದೃಷ್ಟಿಯಿಂದ ತೆರವಾಗಿಯೇ ಇವೆ. ಶಾಶ್ವತ ಕಲ್ಲುಗಳ ಮೇಲೆ ಬರೆದ ಶಾಸನಗಳೇ ನಶಿಸಿ ಹೋಗುತ್ತವೆ ಎಂದಾಗ ಈ ಕಾಗದ ಪತ್ರಗಳ ಗತಿ ಏನು ? ಕರ್ನಾಟಕದಲ್ಲಿ ಇತಿಹಾಸ ಸಂಶೋಧನೆಯು ಹೀಗೆ ಒಗ್ಗಾಲಿ ಅಥವಾ ಒಪ್ಪಾರಿ ಯಾಗಿದೆ. ಹೆಚ್ಚು ಮಹತ್ವ ಪ್ರಾಚೀನ ಮತ್ತು ತದ ನಂತರದ ಕಾಲಕ್ಕೆ ದೊರತಿದೆ. ಅರ್ವಾಚೀನ ಇತಿಹಾಸ ಸಂಶೋಧನೆಗಾಗಿ ತೀವ್ರ ಗಮನವನ್ನು ಕೊಡುವದು ಅಗತ್ಯವಾಗಿದೆ. ಆದರೆ ಇವಕ್ಕೆಲ್ಲ ಭಾಷಾಜ್ಞಾನವೇ ಮೂಲ. ಆಯಾ ಭಾಷೆಗಳಲ್ಲಿ ಪರಿಣತಿ, ಆಯಾ ಕ್ಷೇತ್ರ ಗಳಲ್ಲಿ ಸಂಶೋಧನೆಗೆ ನೆರವನ್ನು ಕೊಡುತ್ತವೆ. ಮೂಲಸಾಮಗ್ರಿಯನ್ನು ಮೂಲದಲ್ಲಿಯೇ ಓದಿ ಸಂಶೋಧನೆ ಮಾಡುವ ಸಾಫಲ್ಯವೇ ಬೇರೆ. ಭಾಷಾಂತರ ಅಥವಾ ಇನ್ನಿತರ ಎರವಲು ಸರಕಿನ ಮೇಲೆ ನಡೆಸುವ ಸಂಶೋಧನೆಯ ಥಳುಕೇ ಬೇರೆ. ನನ್ನ ವಿನಮ್ರ ಸೂಚನೆಯೆಂದರೆ ಮೊದಲು ಆಯಾ ಭಾಷೆಗಳಲ್ಲಿ ಸೂಕ್ತ ತರಬೇತಿ ಬೇಕು, ನಂತರ ಸಂಶೋಧನೆ.

೩. **ಇತಿಹಾಸ ಗ್ರಂಥ ರಚನೆ :** ಕರ್ನಾಟಕದ ಇತಿಹಾಸದ ರಚನೆಯಲ್ಲಿಯೂ ಅಸಮಾಧಾನಕರ ಪರಿಸ್ಥಿತಿ ಯೇನಿಲ್ಲ ಎಂದು ನನಗನಿಸುತ್ತದೆ. ಕಳೆದ ಹಲವಾರು ದಶಕಗಳಿಂದಲೂ ರಾಜಮನೆತನಗಳ ಅಥವಾ ಸಮಗ್ರ ಕರ್ನಾಟಕದ ಇತಿಹಾಸ ರಚನೆ ಪ್ರಯತ್ನಗಳು ನಡೆದೇ ಇವೆ. ಡಾ॥ ಫ್ಲೀಟ್ ಅವರು ೧೮೮೬ ರಷ್ಟು ಪೂರ್ವದಲ್ಲಿ ತಮ್ಮ Dynasties of Canarese Districtsದ ಮುಖಾಂತರ ಕರ್ನಾಟಕದ ಪ್ರಮಾಣ ಬದ್ಧವಾದ ಇತಿಹಾಸದ ರಚನೆಗೆ ನಾಂದಿ ಹಾಡಿದರು. ಆ ಗ್ರಂಥದಲ್ಲಿಯ ಕೊರತೆಗಳನ್ನು ತುಂಬುವಂತೆ ರೈಸರು Mysore and Coorg from Inscriptions ಎಂಬ ಗ್ರಂಥವು ಸ್ವಲ್ಪಮಟ್ಟಿಗೆ ಪೂರಕವೆನಿಸಿತು. ಇವೇನು ಪರಿಪೂರ್ಣ ಗ್ರಂಥಗಳಲ್ಲದಿದ್ದರೂ poineer ಎಂಬ ದೃಷ್ಟಿಯಿಂದ ಈಗಲೂ ಅವುಗಳಿಗೆ ಮಹತ್ವವಿದೆ. ಇಲ್ಲಿಯವರೆಗೆ ಕರ್ನಾಟಕದಲ್ಲಾಳಿದ ಎಲ್ಲ ಪ್ರಮುಖ ರಾಜಮನೆತನಗಳ ಬಗ್ಗೆಯೂ ಗ್ರಂಥಗಳಿವೆ.

Karnataka through the Ages ಮತ್ತು History of Karnataka ಇವು ಕರ್ನಾಟಕದ ಸಮಗ್ರ ಚಿತ್ರಣವನ್ನು ಕೊಡಲು ಹವಣಿಸುತ್ತವೆ. ಆದರೆ ಇವುಗಳಲ್ಲಿಯೂ ಲೋಪಗಳು ಇಲ್ಲದಿಲ್ಲ. ಒಂದು ಸಂತೋಷದ ಸಂಗತಿಯೆಂದರೆ, ನಮ್ಮಲ್ಲಿ ಕನ್ನಡದಲ್ಲಿ ಕರ್ನಾಟಕದ ಚರಿತ್ರೆಯನ್ನು ಬರೆಯುವ ಹವ್ಯಾಸವು ಬಹು ಹಿಂದಿನಿಂದಲೇ ಪ್ರಾರಂಭವಾಗಿದೆ. ವೆಂಕಟ ರಂಗೊ ಕಟ್ಟಿಯವರ ಗೆಝೆಟಿಯರ್ ಭಾಷಾಂತರವನ್ನು ಬಿಟ್ಟರೂ ಸ್ವತಂತ್ರವಾಗಿ ಪೂರ್ಣಪ್ರಮಾಣದ ಚರಿತ್ರೆಯನ್ನು ಬರೆಯಲು ಮೊದಲು ಮಾಡಿದವರು ರಾ. ಹ. ದೇಶಪಾಂಡೆಯವರು (೧೯೨೬). ಇವರ ಮೊದಲ ಎರಡು ಸಂಪುಟಗಳು ಹನ್ನೆರಡನೆಯ ಶತಮಾನದವರೆಗಿನ ಚರಿತ್ರೆಯನ್ನೊಳಗೊಂಡಿದ್ದು ಮುಂದಿನ ಇತಿಹಾಸದ ಹಸ್ತಪ್ರತಿ ಬೆಳಕು ಕಾಣಲೇ ಇಲ್ಲ. ವಿಶೇಷವೆಂದರೆ ಬರೀ ಇತಿಹಾಸ ರಚನೆ ಇವರ ಉದ್ದೇಶವಾಗಿರದೆ, ತಮ್ಮ ತಾಯ್ನಾಡಿನ ಅಭಿವೃದ್ಧಿಗೋಸ್ಕರವಾಗಿ ಕನ್ನಡದ ಏಳ್ಗೆಯ ಸ್ಪಷ್ಟ ಉದ್ದೇಶದಿಂದ ಈ ಸಾಹಸಕ್ಕೆ ಕೈ ಹಾಕಿದರು. ರಾಜಪುರೋಹಿತರ 'ಕರ್ನಾಟಕದ ಇತಿಹಾಸ', ಆಲೂರು ವೆಂಕಟರಾಯರ 'ಕರ್ನಾಟಕದ ಗತವೈಭವ' ಇವು ಕನ್ನಡಿಗರ ಮೇಲಿನ ಅಭಿಮಾನದಿಂದ ಬರೆದವುಗಳು. ಧಾರವಾಡದ ಕರ್ನಾಟಕ ಇತಿಹಾಸ ಮಂಡಳದ ಮಹತ್ವಾಕಾಂಕ್ಷೆ ಯೋಜನೆ ಒಂದು ಸಂಪುಟದ ಪ್ರಕಟಣೆಯಲ್ಲಿಯೇ ಮುಕ್ತಾಯವಾಯಿತು. ಇತ್ತೀಚೆಗೆ ಬಂದ 'ಕರ್ನಾಟಕದ ಇತಿಹಾಸ ದರ್ಶನ' ಸ್ವಲ್ಪಮಟ್ಟಿಗೆ ಕರ್ನಾಟಕದ ಸಮಗ್ರ ಚಿತ್ರಣವನ್ನು ಕೊಡಲು ಪ್ರಯತ್ನಿಸುತ್ತಿದೆ.

ಇಷ್ಟಿದ್ದರೂ ಪರಿಪೂರ್ಣವೆನಿಸಿಕೊಳ್ಳುವ ಗ್ರಂಥ ಇನ್ನೂ ಬಂದಿಲ್ಲ. ಬಹುಶಃ ಬಾರಲೂ ಆಗದು. ಪ್ರತಿಯೊಬ್ಬ ಸಂಶೋಧಕ ಲೇಖಕನಿಗೂ ಒಂದು ದೃಷ್ಟಿಕೋನ, ಅಭಿರುಚಿ,ಬೇಕು ಬೇಡಗಳು, equipment ಇರುತ್ತವೆ. ಅವಕ್ಕನುಗುಣವಾಗಿ ಅವನು ತನ್ನ ಗ್ರಂಥವನ್ನು ರಚಿಸುತ್ತಾನೆ. ಓದುಗನಿಗೂ ತನ್ನದೇ ದೃಷ್ಟಿಕೋನ ಅಭಿರುಚಿ, equipment ಇರುತ್ತವೆ. ಅವಕ್ಕನುಗುಣವಾಗಿಯೇ ಅವನು ಪುಸ್ತಕವನ್ನು ಪರಿಶೀಲಿಸುತ್ತಾನೆ. ಹೀಗಾಗಿ ಯಾವುದೊ ಪುಸಕ್ತದಲ್ಲಿ ಅವನಿಗೆ ಕೊರತೆ ಕಾಣಬಹುದು. ಹೀಗಾಗಿಯೇ ಹೊಸ ಹೊಸ ಪ್ರಯತ್ನಗಳು ನಡೆಯುತವೆ ಮತ್ತು ನಡೆಯಬೇಕು. ನಮ್ಮ ನಾಡಿನ ಬಗ್ಗೆ ಎಷ್ಟು ಪುಸ್ತಕಗಳು ಬಂದರೂ ಕಡಿಮೆಯೆ.

ಇತಿಹಾಸ ಸಂಶೋಧನೆ, ಇತಿಹಾಸ ಗ್ರಂಥರಚನೆ ಮತ್ತು ಇತಿಹಾಸ ಶಿಕ್ಷಣ ಇವು ಅನ್ಯೋನ್ಯ ಸಂಬಂಧವುಳ್ಳವುಗಳು. ಸಂಶೋಧನೆ ಚೆನ್ನಾಗಿದ್ದರೆ ಗ್ರಂಥ ರಚನೆ ಚೆನ್ನಾಗಿ ಆಗುತ್ತದೆ. ತನ್ಮೂಲಕ ಇತಿಹಾಸ ಶಿಕ್ಷಣವೂ ಫಲಪ್ರದವಾಗುತ್ತದೆ.

ಇತಿಹಾಸ ಒಂದು ನಿರಂತರ ಪ್ರಕ್ರಿಯೆ. ಕಾಲಚಕ್ರ ಉರುಳುತ್ತಲೇ ಇರುತ್ತದೆ. ಘಟನೆಗಳು ನಡೆಯುತ್ತಲೇ ಇರುತ್ತವೆ. ಗಮನಾರ್ಹವಾದವುಗಳನ್ನು ಎತ್ತಿಕೊಂಡು ಅವುಗಳನ್ನು ವಿವರಿಸಿ ಆಧು ಸಮಾಜದ ಮುನ್ನಡೆಗೆ ಪ್ರಯೋಜನಕಾರಿಯಾಗುವಂತೆ ಮಾಡುವದೇ ಇತಿಹಾಸಕಾರನ ಕೆಲಸ. ಆ ಕೆಲಸ ನಿರಂತರವಾಗಿ ನಡೆಯಲೆಂದು ಆಶಿಸುತ್ತೇನೆ.

'ಕರ್ನಾಟಕದ ಇತಿಹಾಸ ಅಕಾದೆಮಿ' ಹೊಸದಾಗಿ ರೂಪಗೊಂಡ ಸಂಸ್ಥೆ, ಹೊಸ ರೀತಿಯ ಕಾರ್ಯಕ್ರಮಗಳನ್ನು ಹಾಕಿಕೊಂಡ ಸಂಸ್ಥೆ. ರಾಜ್ಯದ ತುಂಬೆಲ್ಲ ಖಾಸಗಿ ಸಂಸ್ಥೆಯೊಂದು ಪರೀಕ್ಷೆಗಳನ್ನು ನಡೆಸುವದು ಹೊಸ ಉಪಕ್ರಮವೆ. ಅದು ಅಷ್ಟೊಂದು ಜನಪ್ರಿಯವಾಗಿರುವದು ಆಶ್ಚರ್ಯವೆ. ಇತಿಹಾಸದ ಅಭ್ಯಾಸಕ್ಕೆ ಉತ್ತಮ ಭವಿಷ್ಯವಿದೆ ಎಂಬುದರ ಸೂಚನೆಯಿದು. ಅಕಾದೆಮಿ ಇದರ ಪ್ರಯೋಜನ ಪಡೆದು ಜೊತೆಗೆ ಇನ್ನೊಂದೆರಡು ಕಾರ್ಯಕ್ರಮಗಳನ್ನು ಹಾಕಿಕೊಂಡು ಇತಿಹಾಸದ ಅಭ್ಯಾಸ, ಸಂಶೋಧನೆ ಮುನ್ನಡೆಯಲು ಪ್ರಚೋದಿಸುತ್ತದೆಂದು ಆಶಿಸುತ್ತೇನೆ.

ಈಗ ನಡೆಸುತ್ತಿರುವ ಪರೀಕ್ಷೆಗಳ ಜೊತೆಗೆ ವರ್ಷಕ್ಕೊಮ್ಮೆ ನಾಲ್ಕಾರು ದಿನಗಳದೊಂದು Refresher course ನಡೆಸುವ ಪ್ರಯತ್ನವನ್ನು ಅದು ಮಾಡಬೇಕು. ಬೆಂಗಳೂರಿನಲ್ಲಿ ಮತ್ತು ಇತರ ಕೇಂದ್ರಗಳಲ್ಲಿ ಅವಶ್ಯಕ ಭಾಷೆಗಳಲ್ಲಿ ತರಬೇತಿಗಾಗಿ ಅಲ್ಪಾವಧಿಯ ಕೋರ್ಸ

ಗಳನ್ನು ನಡೆಸುವ ಸಾಧ್ಯತೆಯನ್ನು ಪರಿಶೀಲಿಸಬೇಕೆಂದು ಸೂಚಿಸಬಯಸುತ್ತೇನೆ.

ಕೊನೆಯ ಒಂದು ಮಾತೆಂದರೆ, ನನ್ನ ಈ ಭಾಷಣ ಕರ್ನಾಟಕದಲ್ಲಿ ಇತಿಹಾಸದ ಬಗೆಗಿನ ಸಮಸ್ಯೆಗಳೆಲ್ಲವುಗಳ ಸಮಗ್ರ ಪರಿಶೀಲನೆಯಲ್ಲವೆಂದು ಸ್ಪಷ್ಟಪಡಿಸಬಯಸುತ್ತೇನೆ. ಪುರಾತತ್ವ ಮತ್ತು ವಾಸ್ತುಶಿಲ್ಪವಿಷಯಗಳನ್ನು ಇಲ್ಲಿ ಎತ್ತಲಾಗಿಲ್ಲ. ಅದಕ್ಕಿಲ್ಲಿ ಸಮಯವೂ ಇಲ್ಲ, ಅಗತ್ಯವೂ ಇಲ್ಲ.

ಈ ಅಕಾದೆಮಿಯ ಮೊದಲ ಪರಿಷತ್ತಿನ ಅಧ್ಯಕ್ಷರಾಗಿದ್ದ ಡಾ॥ ಎಂ. ಚಿದಾನಂದಮೂರ್ತಿಯವರು ಇಲ್ಲಿ ಆಗಬೇಕಾದ, ಮಾಡಬೇಕಾದ ಕಾರ್ಯಗಳನ್ನು ವಿವರವಾಗಿ ಚರ್ಚಿಸಿದ್ದಾರೆ. ನಾನು ಕೆಲವು ಸಮಸ್ಯೆಗಳ ಬಗ್ಗೆ ನನಗೆ ತೋಚಿದ ಕೆಲವು ವಿಚಾರಗಳನ್ನು ಇಲ್ಲಿ ವ್ಯಕ್ತಪಡಿಸಲು ಯತ್ನಿಸಿದ್ದೇನೆ. ಈ ಅವಕಾಶವನ್ನು ಒದಗಿಸಿದ ಅಕಾದೆಮಿಯ ಪದಾಧಿಕಾರಿಗಳಿಗೆ ಮತ್ತೊಮ್ಮೆ ನನ್ನ ಧನ್ಯವಾದಗಳನ್ನು ಅರ್ಪಿಸುತ್ತೇನೆ. ಈ ಮಾತುಗಳನ್ನು ಸಮಾಧಾನದಿಂದ ಕೇಳಿದ ನಿಮಗೆ ಕೃತಜ್ಞತೆಗಳನ್ನು ಅರ್ಪಿಸುತ್ತೇನೆ.